# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 905 (೪೧೯)
ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 10.03.2021

********

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ ಮಡಿಕೇರಿಯಲ್ಲಿ ಕಟ್ಟುತ್ತಿರುವ ಮಿನಿ ವಿಧಾನಸೌಧದ ಕಾಮಗಾರಿ ನಿಂತು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇದಕ್ಕೆ ಕಾರಣಗಳೇನು; ಈ ಕಾಮಗಾರಿಯನ್ನು ಮುಂದುವರೆಸಲು ಇರುವ ತೊಡಕುಗಳೇನು; (ಪೂರ್ಣ ವಿವರ ನೀಡುವುದು) | -ಇಲ್ಲ-<br><br>ಕೊಡಗು ಜಿಲ್ಲೆ, ಮಡಿಕೇರಿ ತಾಲ್ಲೂಕು ಕರ್ಣಂಗೇರಿ ಗ್ರಾಮದ ಸರ್ವೆ ನಂ:382 ಮತ್ತು 383 ರಲ್ಲಿನ ಒಟ್ಟು 1 ಎಕರೆ 75 ಸೆಂಟ್ಸ್ ಜಾಗದಲ್ಲಿ ಮಡಿಕೇರಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ರೂ.5.00 ಕೋಟಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಅದರಂತೆ ಕಾಮಗಾರಿಯು ಪೂರ್ಣಗೊಂಡಿರುತ್ತದೆ.<br><br>ಮಡಿಕೇರಿ ಮೊದಲ ಹಂತದ ರೂ.5.00 ಕೋಟಿ ಕಾಮಗಾರಿಯು ಪೂರ್ಣಗೊಂಡಿದ್ದು, 2ನೇ ಹಂತದ ಕಾಮಗಾರಿಯನ್ನು ಕೈಗೊಳ್ಳಲು ರೂ.5.00 ಕೋಟಿಗಳ ಅಂದಾಜು ಪಟ್ಟಿ ಸ್ವೀಕೃತವಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲನೆಯಲ್ಲಿದೆ. |
| ಆ) | ಈ ಕಾಮಗಾರಿಗಳಿಗೆ ಬಿಡುಗಡೆಯಾಗಿರುವ ಒಟ್ಟು ಅನುದಾನ ಎಷ್ಟು ; ಖರ್ಚಾಗಿರುವ ಹಣ ಎಷ್ಟು; (ವಿವರಗಳ ಮಾಹಿತಿ ನೀಡುವುದು) | ಕೊಡಗು ಜಿಲ್ಲೆ, ಮಡಿಕೇರಿ ನಗರದಲ್ಲಿ ನಿರ್ಮಿಸುತ್ತಿರುವ ಮಿನಿ ವಿಧಾನಸೌಧ ಕಟ್ಟಡ ಕಾಮಗಾರಿಗೆ ಒಟ್ಟು ರೂ. 5.00 ಕೋಟಿಗಳನ್ನು ನಿಗಧಿಪಡಿಸಿದ್ದು, ಇದರಲ್ಲಿ ರೂ.4.90 ಕೋಟಿಗಳನ್ನು ಆಯುಕ್ತರು ಕರ್ನಾಟಕ ಗೃಹ ಮಂಡಳಿಯವರಿಗೆ ಬಿಡುಗಡೆ ಮಾಡಲಾಗಿದೆ. ಈ ಪೈಕಿ ರೂ.4.55 ಕೋಟಿಗಳ ಅನುದಾನ ವೆಚ್ಚವಾಗಿರುತ್ತದೆ. |
| ಇ) | ಈ ಕಾಮಗಾರಿಯನ್ನು ಯಾವಾಗ ಮುಗಿಸಲಾಗುವುದು? (ವಿವರಗಳನ್ನು ನೀಡುವುದು) | ಮೊದಲ ಹಂತದಲ್ಲಿ ರೂ.5.00 ಕೋಟಿಗಳ ವೆಚ್ಚದ ಕಾಮಗಾರಿಯಲ್ಲಿ ಕಾಲಂಗಳನ್ನು ಎತ್ತರಿಸಿ ಕೆಳ ಅಂತಸ್ತು ಮತ್ತು ಮೊದಲ ಅಂತಸ್ತು ಛಾವಣಿ ಹಾಕಿ Frame Work ನಿರ್ವಹಿಸಿ ಮೊದಲ ಹಂತದ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆ.<br><br>2ನೇ ಹಂತದಲ್ಲಿ ಕಾಮಗಾರಿಯ ರೂ.5.00 ಕೋಟಿಗಳ ಅಂದಾಜು ಪಟ್ಟಿ ಸ್ವೀಕೃತವಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |

ಕಂಇ 34 ಡಬ್ಲ್ಯೂಬಿಆರ್ 2021

**(ಆರ್. ಅಶೋಕ)**
ಕಂದಾಯ ಸಚಿವರು